ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಅಕ್ಷರ ದಾಸೋಹ ಸಂಯೋಜನಾ ಅಧಿಕಾರಿಯ ಅವ್ಯವಹಾರ ಕುರಿತು

ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

888 (835) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಾರವಾರ ಜಿಲ್ಲೆಯ ಕೆಲವೊಂದು ತಾಲ್ಲೂಕು ಕೇಂದ್ರದಲ್ಲಿ ಬಿಸಿಯೂಟದ ಅಕ್ಷರದಾಸೋಹ ಸಂಯೋಜನೆ ಅಧಿಕಾರಿ ಹಾಗೂ (ಎಡಿ) ಅವ್ಯವಹಾರದಲ್ಲಿ ತೊಡಗಿರುವುದು ಜಿಲ್ಲಾ ಅಕ್ಷರದಾಸೋಹ ಅಧಿಕಾರಿ ಶಾಮೀಲಾಗಿ ದರೋಡೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಆ) ಹಳಿಯಾಳ ತಾಲ್ಲೂಕಿನಲ್ಲಿ ಬಿಸಿಯೂಟ ಅಕ್ಷರದಾಸೋಹ ಸಂಯೋಜನೆ ಅಧಿಕಾರಿ (ಎ.ಡಿ.) ಪ್ರತಿಯೊಂದು ಶಾಲೆಗೆ ಭೇಟಿ ನೀಡಿ ಅನಾವಶ್ಯಕ ಶಿಕ್ಷಕರಿಗೆ ಕಿರುಕುಳ ನೀಡಿ ಅವರಿಂದ ಹಣ ವಸೂಲಿ ಮಾಡಿ ಅಧಿಕಾರ ದುರುಪಯೋಗ ಮಾಡುತ್ತಿರುವವರ ಮೇಲೆ ಸೂಕ್ತ ತನಿಖೆ ಮಾಡಿ ಪ್ರಭಾರ ಸ್ಥಾನದಲ್ಲಿರುವ ಅವರ ಸ್ಥಳಕ್ಕೆ ಬೇರೆಯವರನ್ನು ನೇಮಕ ಮಾಡುವರೇ? (ವಿವರ ನೀಡುವುದು)